# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1318
ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ,
ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು
ಉತ್ತರಿಸಬೇಕಾದ ದಿನಾಂಕ : 27.02.2018

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಹಾಪ್‌ಕಾಮ್ಸ್ ಮಳಿಗೆಗಳನ್ನು ಮಾಡಿರುವ ಉದ್ದೇಶವೇನು: ಅದು ಈಡೇರಿದೆಯೇ: | ಬೆಳೆಗಾರರಿಂದ ನೇರವಾಗಿ ತೋಟದ ಉತ್ಪನ್ನಗಳನ್ನು ಖರೀದಿಸಿ ಗ್ರಾಹಕರಿಗೆ ಉತ್ತಮ ಗುಣಮಟ್ಟದ ಹಣ್ಣು ತರಕಾರಿಗಳನ್ನು ಸ್ಪರ್ಧಾತ್ಮಕ ದರಗಳಲ್ಲಿ ಮಾರಾಟ ಮಾಡಲು ಮಧ್ಯವರ್ತಿಗಳ ಪಾಲುದಾರಿಕೆ ಇಲ್ಲದಂತೆ ಮಾಡುವ ಉದ್ದೇಶದಿಂದ ಮಳಿಗೆಗಳನ್ನು ತೆರೆಯಲಾಗಿದೆ.<br><br>ಈ ಉದ್ದೇಶವು ಈಡೇರಿದೆ. |
| ಆ | ಇಲ್ಲಿ ಉತ್ತಮ ದರ್ಜೆಯ ಹಣ್ಣು ಮತ್ತು ತರಕಾರಿಗಳು ಸಿಗುತ್ತಿಲ್ಲ ಎಂದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಉತ್ತಮ ಗುಣಮಟ್ಟದ ಹಣ್ಣು ತರಕಾರಿಗಳನ್ನು ಮಾರಾಟ ಮಾಡಲಾಗುತ್ತಿದೆ. |
| ಇ | ಅನೇಕ ಹಾಪ್‌ಕಾಮ್ಸ್ ಮಳಿಗೆಗಳಲ್ಲಿ ಕಳಪೆ ಗುಣಮಟ್ಟದ ಹಣ್ಣು ಮತ್ತು ತರಕಾರಿಗಳನ್ನು ಮಾರಾಟ ಮಾಡುತ್ತಿದ್ದು, ಇದನ್ನು ಅಧಿಕಾರಿಗಳು ತಪಾಸಣೆ ಮಾಡುವುದಿಲ್ಲವೆ: ಎಷ್ಟು ಕಡೆ ತಪಾಸಣೆ ಮಾಡಿ ಯಾವ ರೀತಿಯ ಕ್ರಮ ಕೈಗೊಳ್ಳಲಾಗಿದೆ: | ಹಾಪ್‌ಕಾಮ್ಸ್ ಮಳಿಗೆಗಳಲ್ಲಿ ಉತ್ತಮ ಗುಣಮಟ್ಟದ ಹಣ್ಣು ಮತ್ತು ತರಕಾರಿಗಳನ್ನು ಸಂಸ್ಥೆಯು ನಿಗದಿಪಡಿಸಿದ ದರದಂತೆ ಆನ್‌ಲೈನ್ ಸ್ಕೇಲ್‌ಗಳಲ್ಲಿ ಮಾರಾಟ ಮಾಡಲಾಗುತ್ತಿದೆ ಇದನ್ನು ಅಧಿಕಾರಿಗಳು ತಪಾಸಣೆ ಮಾಡುತ್ತಿದ್ದಾರೆ.<br><br>ಗುಣಮಟ್ಟ ಮತ್ತು ಮಾರಾಟ ದರಗಳ ಬಗ್ಗೆ ಪರಿಶೀಲಿಸಲು 13 ಮಾರ್ಗಗಳಿಗೆ ಜಾಗೃತದಳ ಸದಸ್ಯರನ್ನು ನೇಮಿಸಿದ್ದು, ಇವರು ನೀಡಿರುವ ವರದಿಯಂತೆ 2016-17ನೇ ಸಾಲಿನಲ್ಲಿ 23 ಜನ ಮಾರಾಟಗಾರರ ವಿರುದ್ಧ ಎಚ್ಚರಿಕೆ ನೋಟಿಸ್ ಮತ್ತು ದಂಡ ವಿಧಿಸುವ ಕ್ರಮಕೈಗೊಳ್ಳಲಾಗಿದೆ. |
| ಈ | ಹಾಪ್‌ಕಾಮ್ಸ್ ಮಳಿಗೆಗಳಲ್ಲಿ ಕೆಲಸ ಮಾಡುತ್ತಿರುವ ನೌಕರರನ್ನು ಎಷ್ಟು ವರ್ಷಕ್ಕೊಮ್ಮೆ ವರ್ಗಾವಣೆ ಮಾಡುತ್ತೀರಿ: ಈ ಬಗ್ಗೆ ಸರ್ಕಾರದ ನೀತಿ ಏನು? | ಹಾಪ್‌ಕಾಮ್ಸ್ ಮಳಿಗೆಗಳಲ್ಲಿ ಕೆಲಸ ಮಾಡುತ್ತಿರುವ ನೌಕರರನ್ನು ಇಂತಿಷ್ಟು ವರ್ಷಕ್ಕೊಮ್ಮೆ ವರ್ಗಾವಣೆ ಮಾಡಬೇಕೆಂಬ ಪರಿಪಾಠ ಇರುವುದಿಲ್ಲ. ಹಾಪ್‌ಕಾಮ್ಸ್ ಸಂಸ್ಥೆಯು ಸಹಕಾರಿ ಸಂಸ್ಥೆಯಾಗಿದ್ದು, "ಸಿಬ್ಬಂದಿ ಸೇವಾ ನಿಯಮಗಳನ್ವಯ" ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ತೋಇ 117 ತೋಇವಿ 2018

(ಎಸ್.ಎಸ್.ಮಲ್ಲಿಕಾರ್ಜುನ್)
ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು.